**ಹನುಮಂತರೆಡ್ಡಿ. ವೈ.***

# ಶ್ರೀ ಪಂಚಮುಖೀ ವೀರಭದ್ರೇಶ್ವರ

ಬಳ್ಳಾರಿಯಿಂದ ವಾಯುವ್ಯ ದಿಕ್ಕಿಗೆ 30 ಕಿ.ಮೀ. ದೂರದಲ್ಲಿ **ಕುರುಗೋಡು** ಪಟ್ಟಣವಿದೆ. ಇದು ಐತಿಹಾಸಿಕ ಪ್ರಸಿದ್ಧ ಸ್ಥಳ. ಕ್ರಿ. ಶ. ೧೦ನೇ ಶತಮಾನ ದಿಂದ ೧೨ ನೇ ಶತಮಾನದವರೆಗೆ **'ಬಲ್ಲಕುಂದೆ ೩೦೦'** ನಾಡಿನ ರಾಜಧಾನಿಯಾಗಿ ಇದು ಮೆರೆದಿದೆ. ಆ ಕಾಲ ದಲ್ಲಿ ನಿರ್ಮಿಸಲ್ಪಟ್ಟ, ಕಲ್ಯಾಣಿ ಚಾಲುಕ್ಯ ಶೈಲಿಯ ಹಲವಾರು ದೇವಸ್ಥಾನಗಳು, ತ್ರಿಕೂಟ ಮಂದಿರಗಳು ಮತ್ತು ಜೈನ ಬಸದಿಗಳೂ ಈಗಲೂ ಇಲ್ಲಿ ಕಂಡು ಬರುತ್ತಿವೆ. ಇವುಗಳಲ್ಲಿ **'ಪಂಚಮುಖೀ ವೀರಭದ್ರೇ ಶ್ವರ',** ದೇವಸ್ಥಾನ ಬಹಳ ಅಪೂರ್ವವಾದದ್ದು ಮತ್ತು ಮಹತ್ವ ಪೂರ್ಣವಾದದ್ದು.

ಪ್ರಸ್ತುತ ಕುರುಗೋಡು ಪಟ್ಟಣದಿಂದ ಸುಮಾರು ಅರ್ಧ ಕಿ. ಮೀ. ದೂರದಲ್ಲಿ ವಾಯುವ್ಯ ದಿಕ್ಕಿನಲ್ಲಿ ಹಬ್ಬಿರುವ ಬೆಟ್ಟದ ಮಧ್ಯದಲ್ಲಿ ಸುಮಾರು ೧೦೦ ಅಡಿ ಎತ್ತರದಲ್ಲಿ ಈ 'ಪಂಚಮುಖೀ ವೀರಭದ್ರೇಶ್ವರ' ದೇವ ಸ್ಥಾನವಿದೆ. ಇದು ಮೂಲತಃ ಒಂದು 'ಶಿವಾಲಯ' ವಾಗಿದ್ದು, ಕಾಲಾನಂತರದಲ್ಲಿ ಅದು ಹಾಳಾಗಿ, ಗರ್ಭ ಗೃಹದ ಹೊರತಾಗಿ, ಉಳಿದ ಭಾಗ ಈ ಶತಮಾನದ ಆದಿಭಾಗದಲ್ಲಿ ಜೀರ್ಣೋದ್ಧಾರಗೊಂಡಿದೆ. ಇದು ಪೂರ್ವಾಭಿಮುಖವಾಗಿದ್ದು, ಉತ್ತರ ಮತ್ತು ದಕ್ಷಿಣಕ್ಕೆ ಪ್ರವೇಶ ದ್ವಾರಗಳೂ ಇವೆ. ಮೂರು ಅಂಕಣದ ಸಭಾಮಂಟಪದ ಮಧ್ಯದಲ್ಲಿ ೩ ಅಡಿ ಎತ್ತರವುಳ್ಳ 'ಬಸವಣ್ಣನ' ಶಿಲಾಮೂರ್ತಿ ಇದ್ದು, ವೀರಭದ್ರನ ಮೂರ್ತಿಗೆ ಅಭಿಮುಖವಾಗಿದೆ. ಸಭಾಮಂಟಪಕ್ಕೆ ಹೊಂದಿಕೊಂಡು ಇರುವ ೮'×೮' ಚೌಕಾಕಾರದ ಗರ್ಭಗೃಹದಲ್ಲಿ ಸ್ವಾಭಾವಿಕವಾಗಿದ್ದ ಬಂಡೆಯನ್ನೇ ಸಮತಟ್ಟಾಗಿ ಕೆತ್ತಿ ಅದರ ಮಧ್ಯ ಭಾಗದಲ್ಲಿ ೨' ವ್ಯಾಸದ ದುಂಡಾದ ಪಾಣಿಪೀಠದ ಮಧ್ಯದಲ್ಲಿ ಸ್ಥಾಪಿತ ವಾಗಿದ್ದ ಶಿವಲಿಂಗದ ಸ್ಥಾನದಲ್ಲಿ, ತದನಂತರದಲ್ಲಿ ಪಂಚಮುಖಗಳುಳ್ಳ ವೀರಭದ್ರನ ಮೂರ್ತಿಯನ್ನು ಸ್ಥಾಪಿಸಲಾಗಿದೆ ಎಂದು ಪರಿಶೀಲನೆಯಿಂದ ತಿಳಿದು ಬರುತ್ತದೆ.

ಈ ವೀರಭದ್ರನ ಮೂರ್ತಿಯು ೩'–೯" ಎತ್ತರ ವಾಗಿದ್ದು, ಬಲಗಾಲನ್ನು ನೇರವಾಗಿ, ಎಡಗಾಲನ್ನು ಎಡಕ್ಕೆ ಸ್ವಲ್ಪ ಓರೆಯಾಗಿ ಇಟ್ಟಂಥ ನಿಂತ ಭಂಗಿಯಲ್ಲಿದೆ. (ಆಲೀಢಭಂಗಿ), ಸಾಮಾನ್ಯವಾಗಿ ಎಲ್ಲಕಡೆಯಲ್ಲಿಯೂ, ವೀರಭದ್ರನಿಗೆ ಏಕಮುಖವಿದ್ದು, ಇಲ್ಲಿರುವ ಈ ಮೂರ್ತಿಗೆ ಗಂಭೀರವಾದ **'ಐದು ಮುಖಗಳೂ' 'ಹನ್ನೆರಡು ಕೈಗಳೂ'** ಇರುವುದು **ಬಹಳ ಅಪರೂಪ ವಾಗಿದೆ.** ಪ್ರತಿ ಮುಖದ ಹಣೆಯ ಮಧ್ಯದಲ್ಲಿ ಹಣೆಗಣ್ಣು (ಮೂರನೆ ಕಣ್ಣು) ಮತ್ತು ಕೋರೆ ಮೀಸೆಗಳಿವೆ. ಎಲ್ಲಾ ೫ ತಲೆಗಳ ಮೇಲೆ ಅಲಂಕಾರ ಯುಕ್ತವಾದ ಕಿರೀಟಗಳಿವೆ. ಆದರೆ ಮಧ್ಯದ ತಲೆಯ ಮೇಲೆ ಧರಿಸಿ ರುವ ಕಿರೀಟದ ಮುಂಭಾಗದ ಮಧ್ಯದಲ್ಲಿ ಅಲಂಕಾರದ ದೊಂದಿಗೆ ಶಿವಲಿಂಗದ ಮುದ್ರೆಯಿದೆ. ಕೊರಳಲ್ಲಿ ಕರಡಿಗೆ (ಲಿಂಗದಕಾಯಿ) ಮತ್ತು ಬೇರೆ ಬೇರೆ ಆಳತೆಯ

* ಮುಖ್ಯೋಪಾಧ್ಯಾಯರು, ಜಿಲ್ಲಾ ಪರಿಷತ್ ಬಾಲಕಿಯರ ಪ್ರೌಢಶಾಲೆ, ಕುರುಗೋಡು.

ಮೂರು ತರಹದ ರುದ್ರಾಕ್ಷಿಯ ಮಾಲೆಗಳೂ ಧರಿಸಲ್ಪಟ್ಟಿವೆ. ಕಿವಿಯಲ್ಲಿ 'ಕರ್ಣಕುಂಡಲ' ದಂತಹ ಆಭರಣಗಳಿಂದ ಅಲಂಕೃತ ವಾಗಿವೆ. ಎಡಭುಜದ ಮೇಲಿನಿಂದ ಸೊಂಟದ ಬಲಬದಿಯ ವರೆಗೆ ಜನಿವಾರ? ಓರೆಯಾಗಿ ಜೋತು ಬಿದ್ದಿದೆ. ಭುಜಗಳು 'ಭುಜಕೀರ್ತಿ' ಮಾದರಿಯ ಆಭರಣಗಳಿಂದ ಅಲಂಕರಿಸಲ್ಪಟ್ಟಿವೆ.

ಈ ರುದ್ರಗಂಭೀರ ಮೂರ್ತಿಗೆ ಹನ್ನೆರಡು ಹಸ್ತಗಳಿದ್ದು, ದಕ್ಷ ಸಂಹಾರಕ್ಕೆ ಹೊರಟ ಸಂದರ್ಭದಲ್ಲಿ ಧರಿಸಿದಂತೆ ಅನೇಕ ತರದ ಆಯುಧಗಳನ್ನು ಧರಿಸಲಾಗಿದೆ. ಬಲಗಡೆಯ ಆರು ಹಸ್ತಗಳಲ್ಲಿ ಮೇಲಿನಿಂದ ಕೆಳಕ್ಕೆ ಕ್ರಮವಾಗಿ ೧) ತ್ರಿಶೂಲ ೨) ಬಾಣ ೩) ಜಿಂಕೆ ಆಕಾರದ ಆಯುಧ (ಮೃಗಾಂಕ) ೪) ಕಠಾರಿ ೫) ಉದ್ದವಾದ ಖಡ್ಗ ೬) ಖೇಟಕ ಅಥವಾ ಕೈಗತ್ತಿ (ಇಬ್ಬದಿಯಲ್ಲಿ ಹರಿತವಾಗಿದ್ದು **'S'** ಆಕಾರದಲ್ಲಿ ಅಂಕುಡೊಂಕಾಗಿದೆ) ಧರಿಸಲ್ಪಟ್ಟಿವೆ.

ಎಡಭಾಗದ ಹಸ್ತಗಳಲ್ಲಿ ಮೇಲಿನಿಂದ ಕೆಳಕ್ಕೆ ಕ್ರಮವಾಗಿ ೧) ಡಮರು, ೨) ಬಿಲ್ಲು, ೩) ಡಾಲು, (ದುಂಡಾಕಾರದ ಮತ್ತು ಹಿಡಿಕೆಯುಳ್ಳ ಚಿಕ್ಕ ಗುರಾಣಿಯಂಥ ಆಯುಧ), ೪) ಗುರಾಣಿ (ದೊಡ್ಡದಾದ ಆಯತಾಕಾರದ ಹಿಂಬದಿಯಲ್ಲಿ ಹಿಡಿಕೆಯುಳ್ಳದ್ದು), ೫) ಐದನೇ ಹಸ್ತ ಮೊಣಕೈ ಬಾಗಿಸಿ ಎಡತೊಡೆಯ ಮೇಲೆ ಇಡಲಾಗಿದೆ, ೬) ಆರನೇ ಹಸ್ತ ಅಭಯ ಹಸ್ತದ ಮುದ್ರೆಯುಳ್ಳದಾಗಿದೆ.

ಈ ಮೂರ್ತಿಯು ನಡುವಿನ ವೀರಗಾಸೆಯನ್ನು ಧರಿಸಿದ್ದು, ಬಲತೊಡೆಯ ಮೇಲೆ ಚಿಕ್ಕದಾದ ಚೂರಿ (ನೇತಾಡುತ್ತಿದೆ) ಇಳಿಬಿದ್ದಿದೆ. ಎರಡು ತೊಡೆಗಳ ಮುಂಭಾಗದಲ್ಲಿ (ವೀರಗಾಸೆಯ ಸ್ವಲ್ಪ ಕೆಳಗಡೆ) ಐದು ರುಂಡಮಾಲೆಯು ಆಭರಣದಂತೆ ಧರಿಸಲಾಗಿದೆ. ಬಲತೊಡೆಯ ಮೇಲೆ ಬಂದು ಜಂಗನ್ನು ಧರಿಸಿದ್ದು, ಬಲ ಮೊಣಕಾಲಿನ ಕೆಳಗೆ ಕಾಲಿಗೆ ಸುತ್ತಿರುವ ನಾಗಾಭರಣವಿದೆ. ಎಡ ಮೊಣಕಾಲಿನ ಮೇಲೆಯೂ ಒಂದು ಜಂಗನ್ನು ಧರಿಸಲಾಗಿದೆ. ಎರಡೂ ಪಾದಗಳಲ್ಲಿ ದಪ್ಪದಾದ ಹಾವುಗೆ ಗಳನ್ನು ಮೆಟ್ಟಿನಿಂತಿರುವಂತಿದೆ. ಮೂರ್ತಿಯನ್ನು ಖಂಡಿಸಿರುವ ಶಿಲಾ ಫಲಕದ ಮೇಲ್ಭಾಗದಲ್ಲಿ ಅರ್ಧ ಚಂದ್ರಾಕೃತಿಯಲ್ಲಿ ಪ್ರಭಾವಳಿಯ ತರಹದ ರಚನೆಯಿದೆ. ಈ ಮೂರ್ತಿಯ ಬಲ ಮೊಣಕಾಲ ಬದಿಯಲ್ಲಿ ಸುಮಾರು ಒಂದು ಅಡಿ ಎತ್ತರದ ಟಗರಿನ ತಲೆಯನಿಂತ ಭಂಗಿಯಲ್ಲಿರುವ 'ದಕ್ಷನ' ಮೂರ್ತಿಯಿದೆ.

ಇದೆಲ್ಲಕ್ಕಿಂತಲೂ ಹೆಚ್ಚಿನ ವಿಶೇಷವೆಂದರೆ, ಈ ವೀರಭದ್ರನ ಮೂರ್ತಿಯನ್ನು ಒಂದು ಶಿಲಾ ಶಾಸನವನ್ನು ಮೊದಲು ಖಂಡಿಸಲಾಗಿದ್ದ ಕರಿಕಲ್ಲಿನ ಶಿಲಾ ಫಲಕದಲ್ಲಿ ನಿರ್ಮಿಸಲಾಗಿದೆ. ಶಿಲಾಫಲಕದ ಮುಂಭಾಗದಲ್ಲಿ ಈ ಮೂರ್ತಿಯನ್ನು ಕೆತ್ತಿದ್ದು, ಹಿಂಭಾಗದಲ್ಲಿ ಈಗಲೂ ಶಾಸನದ ಭಾಗವು ಉಳಿದಿದೆ. ಆದರೆ ಶಾಸನದ ಸಾಲುಗಳನ್ನು ಓದಲು ಬಾರದಂತೆ ಉಳಿಯಿಂದ ಅಳಿಸಲಾಗಿದೆ. ಪರಿಶೀಲಿಸಿ ನೋಡಲಾಗಿ ಇದು ಸುಮಾರು ೧೨-೧೩ನೇ ಶತಮಾನಕ್ಕೆ ಸೇರಿದ ಕನ್ನಡ ಲಿಪಿಯನ್ನು ಹೋಲುವ ಒಂದು ಶಾಸನವಾಗಿರಬಹುದೆಂದು ಊಹಿಸಲಾಗಿದೆ. ಈ ತರಹದ ಪಂಚಮುಖವುಳ್ಳ ೧೨ ಹಸ್ತಗಳಿರುವ ವೀರಭದ್ರನ ಶಿಲಾಮೂರ್ತಿ ನಮ್ಮ ದೇಶದಲ್ಲಿಯೇ ಬಹಳ ಅಪೂರ್ವವಾದುದೆಂದು ತಿಳಿಯಲಾಗಿದೆ.